

# ಕರ್ನಾಟಕ  ವಿಧಾನ ಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 25-03-2021 ಪ್ರಶ್ನೆ ಸಂಖ್ಯೆ : 292 (2205+2125)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಆರ್. ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಶ್ರೀ ಹೆಚ್. ಎಂ. ರಮೇಶಗೌಡ (ವಿಧಾನಸಭೆಯಿಂದ ಚುನಾಯಿತರಾದವರು )

ಉತ್ತರ ನೀಡಬೇಕಾದ ದಿನಾಂಕ : 25-03-2021

ಉತ್ತರಿಸುವ ಸಚಿವರು : ಅಬಕಾರಿ ಸಚಿವರು

ವಿಷಯ : ಮದ್ಯಪಾನದಿಂದ ಆಗುವ ದುಷ್ಪರಿಣಾಮ ಹಾಗೂ ಮದ್ಯದಂಗಡಿಗಳಿಗೆ ಪರವಾನಿಗೆ ನೀಡುವ ಕುರಿತು

(ಅ) ಮದ್ಯಪಾನದಿಂದ ಸಮಾಜದಲ್ಲಿ ದುಷ್ಪರಿಣಾಮಗಳುಂಟಾಗುತ್ತಿದ್ದು, ಹಲವಾರು ಕುಟುಂಬಗಳು ಬೀದಿಪಾಲಾಗುತ್ತಿದ್ದರೂ ಸಹ ಮದ್ಯದಂಗಡಿಗಳನ್ನು ತೆರೆಯಲು ಸರ್ಕಾರ ಅನುಮತಿ ನೀಡುತ್ತಿರುವುದು ಸರಿಯೇ;

(ಆ) ನಗರ ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ಜನಸಂಖ್ಯೆಗೆ ಅನುಗುಣವಾಗಿ ಎಲ್ಲೆಲ್ಲಿ ಎಷ್ಟೆಷ್ಟು ಮದ್ಯದಂಗಡಿಗಳನ್ನು ತೆರೆಯಬೇಕೆಂಬ ಬಗ್ಗೆ ಸಮೀಕ್ಷೆ ಮಾಡಲಾಗಿದೆ; ಯಾವ ಆಧಾರದಲ್ಲಿ ಅನುಮತಿ ನೀಡಲಾಗುತ್ತದೆ;

(ಇ) ರಾಜ್ಯದಲ್ಲಿ ಸಿಎಲ್2, ಸಿಎಲ್4, ಸಿಎಲ್6ಎ, ಸಿಎಲ್7, ಸಿಎಲ್9, ಸಿಎಲ್11ಸಿ, ಆರ್‌ವಿ.ಬಿ ಮತ್ತು ಇತರೆ ಪರವಾನಗಿಗಳನ್ನು ನೀಡಲು ಹಾಗೂ ಪಡೆಯಲು ಅನುಸರಿಸುವ ಮಾನದಂಡಗಳೇನು; (ಸಂಪೂರ್ಣ ವಿವರ ನೀಡುವುದು)

(ಈ) ಒಂದು ಪರವನಾಗಿ ಪಡೆದ ಉದ್ದಿಮೆದಾರರು ಅದೇ ಪರವಾನಗಿಯಡಿಯಲ್ಲಿ ಜಿಲ್ಲೆಯ ಬೇರೆ ಬೇರೆ ಜಾಗಗಳಲ್ಲಿ ಅಬಕಾರಿ ಮಳಿಗೆಗಳು/ಬಾರ್ ಅಂಡ್ ರೆಸ್ಟೋರೆಂಟ್ ಹಾಗೂ ಇತರೆ ಮಳಿಗೆಗಳನ್ನು ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು)

(ಉ) ಪರವಾನಗಿ ಮಂಜೂರು ಮಾಡುವ ಸಂದರ್ಭದಲ್ಲಿ ಅಧಿಕಾರಿಗಳು ಮಾನದಂಡಗಳನ್ನು ಅನುಸರಿಸದೇ ಉಲ್ಲಂಘನೆ ಮಾಡಿ ಪರವಾನಗಿ ಮಂಜೂರು ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಸಂಬಂಧಿಸಿದ ಅಧಿಕಾರಿಗಳ ವಿರುದ್ಧ ಯಾವ ಯಾವ ಶಿಸ್ತಿನ ಕ್ರಮಗಳನ್ನು ಕೈಗೊಳ್ಳಲಾಗಿದೆ; (ವಿವರ ನೀಡುವುದು)

(ಊ) ರಾಜ್ಯದಲ್ಲಿ ಪರವಾನಗಿ ಮಂಜೂರು ಮಾಡುವ ಸಂದರ್ಭದಲ್ಲಿ ಮಾನದಂಡಗಳನ್ನು ಅನುಸರಿಸದೇ ನಿಯಮಗಳನ್ನು ಉಲ್ಲಂಘಿಸಿರುವ ಪ್ರಕರಣಗಳೆಷ್ಟು; (ವಿವರ ನೀಡುವುದು) ಸದರಿ ಪ್ರಕರಣಗಳ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು)